# ಶ್ರೀ ಪುರಂದರದಾಸಾರ್ಯ


















## ವಿರಚಿತ


















# ಕೇಶವನಾಮ


















## ಸಂಪಾದಕ : ಅರವಿಂದಲೋಚನ

# ಶ್ರೀ ಪುರಂದರದಾಸಾರ್ಯ

# ಶ್ರೀ ಕೇಶವ ನಾಮ

## ರಾಗ : ಆನಂದಭೈರವಿ

## ತಾಳ : ರೂಪಕ

ಅಚ್ಯುತಾನಂತ ಗೋವಿಂದ ಹರಿ
ಸಚ್ಚಿದಾನಂದ ಸ್ವರೂಪ ಮುಕುಂದ ॥ ಪ ॥

ಕೇಶವ ಕೃಷ್ಣ ಮುಕುಂದ ಹರಿ
ವಾಸುದೇವ ಗುರು ಜಗದಾದಿವಂದ್ಯ
ಯಶೋದೆಯ ಸುಕೃತದ ಕಂದ ಸ್ವಾಮಿ
ಶೇಷಶಯನ ಭಕ್ತ ಹೃದಯಾನಂದ ॥ 1 ॥

ನಾರಾಯಣ ನಿಮ್ಮ ನಾಮ ಎನ್ನ
ನಾಲಿಗೆ ಮೇಲಿರಬೇಕೆಂಬ ನೇಮ
ನಾನು ಬೇಡುವೆ ನಿಮ್ಮ ನಾಮ ಪ್ರಾಣಪ -
ಯಣದ ಸಮಯಕೊದಗಲಿ ಗುಣಧಾಮ ॥ 2 ॥

ಮಾಧವ ಮಂಗಳಗಾತ್ರ ಸ್ವಾಮಿ
ಯಾದವ ಕೈಲಾಸವಾಸನ ಮಿತ್ರ
ಮಹಿಮೆ ಕೇಳಿದರೆ ವಿಚಿತ್ರ ನಿನ್ನ
ಮನಮೆಚ್ಚಲಿ ಸತ್ಯಭಾಮಾಕಳತ್ರ ॥ 3 ॥

ಗೋವಿಂದ ಗೋಪಾಲ ಬಾಲ ಸೋಳ -
ಸಾಸಿರ ಗೋಪೇರ ಆನಂದಲೀಲ
ನೀಲಮಣಿ ಮುಕ್ತಮಾಲಾ ನಿಮ್ಮ

ನೇನೆಂದು ಕರೆಯಲಿ ಸುಗ್ರೀವಪಾಲ ॥ 4 ॥

ವಿಷ್ಣು ಚಕ್ರವು ಬಂದು ಸುತ್ತಿ ಮೂರು
ಸೃಷ್ಟಿಯನೆಲ್ಲ ತಿರುಗಿ ಬೆನ್ನಟ್ಟಿ
ಕೃಷ್ಣ ಸಲಹೆಂದು ಮೊರೆಯಿಟ್ಟ ಮುನಿ
ಶ್ರೇಷ್ಠಗಿಷ್ಟರ ಮೇಲೆ ಅಭಯವ ಕೊಟ್ಟೆ ॥ 5 ॥

ಮಧುಸೂದನ ಮಾರಜನಕ ಮದ -
ಗಜ ಸೀಳಿ ಮಲ್ಲರ ಗೆಲಿದೆ ತವಕ
ಒದಗಿ ಕಂಸನ ಕೊಂದ ಬಳಿಕ ನೀ
ಮುದಕಗೆ ಪಟ್ಟವ ಕಟ್ಟಿದ್ಯೋ ಧನಿಕ ॥ 6 ॥

ತ್ರಿವಿಕ್ರಮ ತ್ರೈಲೋಕ್ಯನಾಥ ದೇವ
ತ್ರಿಪುರದ ಸತಿಯರ ವ್ರತಕೆ ವಿಘಾತ

ಯದುವಂಶ ಪಾಂಡವ ಪ್ರೀತ ಎನ್ನ

ಹೃದಯದೊಳಡಗಿರೋ ಶ್ರೀಜಗನ್ನಾಥ ॥ 7 ॥

ವಾಮನ ರೂಪಿಲಿ ಬಂದು ಬಲಿಯ

ದಾನವ ಬೇಡಲು ಉಚಿತವು ಎಂದು

ಧಾರೆಯನೆರೆಯಲು ಅಂದು ಬೆಳೆದು

ಧಾರಿಣಿಯೆಲ್ಲವನಳಿದ್ಯೋ ನೀನಂದು ॥ 8 ॥

ಶ್ರೀಧರ ಶೃಂಗಾರ ಹಾರ ದಿವ್ಯ

ಶ್ರೀವತ್ಸಲಾಂಛನ ಶ್ರೀರಘುವೀರ

ವಾರಿಧಿಸಮಗಂಭೀರ ಧೀರ

ಕ್ರೂರ ರಕ್ಕಸರನೆಲ್ಲರ ಸಂಹಾರಾ ॥ 9 ॥

ಹೃಷಿಕೇಶ ವೃಂದಾವನದಲಿ ನೀ
ಹರುಷದಿ ಕೊಳಲನೂದುತ ಯಮುನೆಯಲಿ
ಸತಿಯರ ಸಮ್ಮೇಳದಲಿ ನೀ
ಧರಿಸಿದ್ಯೋ ಮಂದಾರಮಾಲೆ ಕೊರಳಲ್ಲಿ ॥ 10 ॥

ಪದ್ಮನಾಭ ಕೇಳೊ ಘನ್ನ ಪಾದ -
ಪದ್ಮವ ತೋರಿಸೋ ಬೇಗನೆ ನಿನ್ನ
ಮುದ್ದುಮುಖವ ತೋರಿ ಎನ್ನ ಬೇಗ
ಉದ್ಧಾರ ಮಾಡೆಂದು ಬೇಡುವೆ ನಿನ್ನ ॥ 11 ॥

ದಾಮೋದರ ಗುಣಧಾಮ ಸ್ವಾಮಿ
ದಾನವಾಂತಕ ಯದುಕುಲಸಾರ್ವಭೌಮ
ನೀಲಮೇಘನಿಭಶ್ಯಾಮ ಕೃಷ್ಣ
ನೀಲಾಪತಿಯೆಂಬ ಬಹುಪುಣ್ಯನಾಮ ॥ 12 ॥

ಸಂಕರ್ಷಣ ದನುಜಹರಣ ದೇವ
ಪಂಕಜಮುಖಿ ದ್ರೌಪದಿ ಮೇಲೆ ಕರುಣ
ಕುಂಕುಮಾಂಕಿತರೇಖಾಚರಣ ನಿಜ
ಕಂಕಣ ಕೇಯೂರ ಕೌಸ್ತುಭಾಭರಣ ॥ **13 ॥**

ವಾಸುದೇವ ಕೇಳೋ ನಿನ್ನ ದಿವ್ಯ
ಸಾಸಿರನಾಮವ ನೆನೆವನೆ ಧನ್ಯ
ಬೇಸರದೆ ಸಲಹಬೇಕೆನ್ನ ತುಸು
ಘಾಸಿಯ ಮಾಡದೆ ಕರುಣಾಸಂಪನ್ನ ॥ **14 ॥**

ಪ್ರದ್ಯುಮ್ನ ನೆಂದು ನಾ ಕರೆದೆ ಎನ್ನ
ಬದ್ಧವಾದ ದುಷ್ಕರ್ಮವ ಕಳೆದೆ
ದುರ್ಬುದ್ಧಿ ದುರ್ವಾಕ್ಯ ಮರೆದೆ

ಸಾಧು ಸಜ್ಜನರ ಸಂಗ ನಿನ್ನಿಂದ ಬೆರೆದೆ ॥ 15 ॥

ಅನಿರುದ್ಧ ಅನುದಿನದಲ್ಲಿ ನೀ
ವಿನಯದಿಂದಿದ್ದು ಗೋಪಿಯರ ಮನೆಯಲ್ಲಿ
ಸನಕಾದಿವಂದ್ಯ ನಿನ್ನಗಲಿ ಒಂದು
ಕ್ಷಣ ಬಿಟ್ಟಿರಲಾರೆ ನಿಲ್ಲೋ ಮನದಲ್ಲಿ ॥ 16 ॥

ಪುರುಷೋತ್ತಮಗಾರು ಸಾಟಿ ಪರಬ್ರಹ್ಮ
ಸ್ವರೂಪಿಯೆ ನಿನಗಾರೊ ಪೋಟಿ
ಮಹಿಮೆ ಕೇಳಿದರೊಂದು ಕೋಟಿ ನಿನ್ನ
ಹೃದಯದಿ ಬ್ರಹ್ಮಾಂಡ ಕಂಡ ಕಿರೀಟಿ ॥ 17 ॥

ಅಧೋಕ್ಷಜ ಅಸುರ ಸಂಹಾರಿ ಕೃಷ್ಣ
ಅದ್ಭುತರೂಪ ಶಿಶುಪಾಲನ ವೈರಿ

ಭಕ್ತರ ಪಾಲಿಪ ಶೌರಿ ಅಜಾ -
ಮಿಳ ನಾರಗನೆನ್ನ ಕಾಯ್ದೆ ಮುರಾರಿ ॥ **18 ॥**

ನರಸಿಂಹ ರೂಪವ ತಾಳ್ದೆ ಕಂದ
ಕರೆಯೆ ಕಂಭದಿ ಬಂದು ಕರುಣದಿ ಕಾಯ್ದೆ
ದುರುಳ ಹಿರಣ್ಯಕನ ಸೀಳ್ದೆ ಅವನ
ಕರುಳ ಬಗೆದು ವನಮಾಲೆ ಹಾಕಿದೆ ॥ **19 ॥**

ಅಚ್ಯುತ ನೀನತಿ ಮುದ್ದು ಗೋಪಿ
ಬಚ್ಚಿಟ್ಟ ಹಾಲು ಮೊಸರು ಬೆಣ್ಣೆ ಮೆದ್ದು
ತುಚ್ಛ ಶಕಟನ ಕಾಲಿಲೊದ್ದು ಕಾಡು
ಕಿಚ್ಚು ನುಂಗಿ ಪಾಲಿಸಿದೆಯೊ ಗೆದ್ದು ॥ **20 ॥**

ಜನಾರ್ದನ ರೂಪ ನೀನಾಗಿ ಎನ್ನ
ಮನದ ಕರ್ಮವ ತೊಲಗಿಸೊ ಮುಂದಾಗಿ
ಮುನಿಗಳೆಲ್ಲರು ಒಂದಾಗಿ ಈ
ತನು ನಿನ್ನದೆಂಬರೋ ಕೇಳೋ ನಿಜವಾಗಿ ॥ 21 ॥

ಉಪೇಂದ್ರ ರೂಪದಿ ಬಂದಿ ಅಪ್ರ -
ಮೇಯ ಕಾಳಿಂಗನ ಮಡುವ ಧುಮುಕಿದಿ
ನಾಗನ ಹೆಡೆಗಳ ತುಳಿದಿ ನಾಗ -
ಪತ್ನಿಯರು ಬೇಡೆ ಪತಿಯ ಪಾಲಿಸಿದಿ ॥ 22 ॥

ಹರಿ ಹರಿಯೆಂದರೆ ಪಾಪರಾಶಿ
ಹರಿದು ಹೋಯಿತು ಎನ್ನ ಮನದ ಸಂತಾಪ
ಸರ್ವರೊಳಗೆ ವಿಶ್ವರೂಪ ನಿನ್ನ
ನೆರೆ ನಂಬಿದವರನ್ನು ಸಲಹುವ ಭೂಪ ॥ 23 ॥

ಕೃಷ್ಣ ಕೃಷ್ಣನೆಂಬ ಸೊಲ್ಲ ಕೇಳಿ
ನಷ್ಟವಾಯಿತು ಎನ್ನ ಪಾಪಗಳೆಲ್ಲ
ಮುಟ್ಟಿ ಭಜಿಸಿರೊ ನೀವೆಲ್ಲ ಪುರಂದರ-
ವಿಠ್ಠಲ ನಲ್ಲದೆ ಮತ್ತೆ ಬೇರಿಲ್ಲ ॥ **24** ॥

# ||ಶ್ರೀ ಕೃಷ್ಣಾರ್ಪಣಮಸ್ತು||

# ||ಶ್ರೀ ಮಧ್ವೇಶಾರ್ಪಣಮಸ್ತು||